# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1026
2. ಸದಸ್ಯರ ಹೆಸರು : ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ : 29.09.2020
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

****

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಡಿಸೆಂಬರ್-2019 ರಿಂದ ಕೊಬ್ಬರಿ ಧಾರಣೆಯು ಇಳಿಮುಖವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕಾರಣಗಳೇನು; (ವಿವರ ನೀಡುವುದು) | ಸರ್ಕಾರದ ಗಮನಕ್ಕೆ ಬಂದಿದೆ.<br><br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಕೊಬ್ಬರಿ ಉತ್ಪನ್ನವು ಹೆಚ್ಚಿನ ಪ್ರಮಾಣದಲ್ಲಿ ಆವಕವಾಗಿರುವುದರಿಂದ ಧಾರಣೆಯು ಹಿಂದಿನ ಸಾಲುಗಳಿಗಿಂತ ಕಡಿಮೆಯಾಗಿರುತ್ತದೆ. |
| ಆ | ಕೊಬ್ಬರಿ ಧಾರಣೆಯು ಇಳಿಮುಖವಾಗುತ್ತಿರುವುದರಿಂದ ತೆಂಗು ಬೆಳೆಗಾರರಿಗೆ ಆಗುತ್ತಿರುವ ನಷ್ಟವನ್ನು ಸರಿದೂಗಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು; ತೆಂಗು ಬೆಳೆಗಾರರಿಗೆ ಸರ್ಕಾರವು ಪರಿಹಾರ ಘೋಷಿಸಿದೆಯೇ; ಘೋಷಿಸಿದ್ದಲ್ಲಿ, ಕ್ವಿಂಟಾಲ್‌ಗೆ ಎಷ್ಟು ಪರಿಹಾರ ಘೋಷಿಸಿದೆ; (ಸಂಪೂರ್ಣ ವಿವರ ನೀಡುವುದು) | ರಾಜ್ಯದ ಪ್ರಮುಖ ಮಾರುಕಟ್ಟೆಗಳಲ್ಲಿ ಕೊಬ್ಬರಿ ಉತ್ಪನ್ನದ ಧಾರಣೆಯು 2020-21 ನೇ ಸಾಲಿಗೆ ಕೇಂದ್ರ ಸರ್ಕಾರವು ಘೋಷಿಸಿರುವ ಎಫ್.ಎ.ಕ್ಯೂ. ಗುಣಮಟ್ಟದ ಕೊಬ್ಬರಿ ಉತ್ಪನ್ನ ಪ್ರತಿ ಕ್ವಿಂಟಾಲಿಗೆ ರೂ.10,300/- ಗಳಿಗಿಂತ ಕಡಿಮೆ ಧಾರಣೆಯಲ್ಲಿ ಮಾರಾಟವಾದ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರದ ವತಿಯಿಂದ ಕೇಂದ್ರ ಸರ್ಕಾರಕ್ಕೆ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಉಂಡೆ ಕೊಬ್ಬರಿಯನ್ನು ಖರೀದಿಸಲು ಪ್ರಸ್ತಾವನೆಯನ್ನು ಸಲ್ಲಿಸಲಾಗಿತ್ತು.<br><br>ರಾಜ್ಯ ಸರ್ಕಾರದ ಮನವಿಯ ಮೇರೆಗೆ ಕೇಂದ್ರ ಸರ್ಕಾರವು ದಿ:08.06.2020ರ ಪತ್ರದನ್ವಯ 38,250 ಮೆಟ್ರಿಕ್ ಟನ್ ಗರಿಷ್ಟ ಖರೀದಿ ಪ್ರಮಾಣವನ್ನು ನಿಗದಿಪಡಿಸಿ 6 ತಿಂಗಳು ಖರೀದಿ ಕಾಲಾವಕಾಶವನ್ನು ನೀಡಿ, ಅನುಮೋದನೆ ನೀಡಿರುತ್ತದೆ. ಕೇಂದ್ರ ಸರ್ಕಾರವು ಘೋಷಿಸಿರುವ ಬೆಂಬಲ ಬೆಲೆ ಪ್ರತಿ ಕ್ವಿಂಟಾಲ್‌ಗೆ ರೂ.10,300/- ಗಳ ಜೊತೆಗೆ ರಾಜ್ಯದ ತೆಂಗು ಬೆಳೆಗಾರರ ಹಿತ ಕಾಪಾಡುವ ಉದ್ದೇಶದಿಂದ ರಾಜ್ಯ ಸರ್ಕಾರದ ವತಿಯಿಂದ ಪ್ರೋತ್ಸಾಹಧನವಾಗಿ ಪ್ರತಿ ಕ್ವಿಂಟಾಲಿಗೆ ರೂ.1,000/- ಗಳನ್ನು ಘೋಷಿಸಿ, ಒಟ್ಟಾರೆಯಾಗಿ ರೂ.11,300/- ಗಳಂತೆ ಖರೀದಿಸಲಾಗುತ್ತಿದೆ. |

....2

| | | |
|---|---|---|
| ಇ | ತೆಂಗು ಬೆಳೆಗಾರರಿಗೆ ವಿಶೇಷ ಪ್ಯಾಕೇಜ್ ಅಥವಾ ಬೆಂಬಲ ಬೆಲೆ ಘೋಷಿಸಲು ಮತ್ತು ನಾಫೆಡ್ ಮೂಲಕ ಕೊಬ್ಬರಿ ಖರೀದಿ ಕೇಂದ್ರಗಳನ್ನು ತೆರೆಯುವ ಬಗ್ಗೆ ಸರ್ಕಾರದ ನಿಲುವೇನು? | ಕೇಂದ್ರ ಸರ್ಕಾರದ ಬೆಂಬಲ ಬೆಲೆ ಮಾರ್ಗಸೂಚಿಗಳನ್ವಯ ತುಮಕೂರು, ಹಾಸನ, ಚಿಕ್ಕಮಗಳೂರು, ಚಿತ್ರದುರ್ಗ, ಮಂಡ್ಯ, ಮೈಸೂರು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಪ್ರತಿ ರೈತರಿಂದ ಗರಿಷ್ಟ 20 ಕ್ವಿಂಟಾಲ್‌ನಂತೆ ಉಂಡೆ ಕೊಬ್ಬರಿಯನ್ನು ಅಗತ್ಯಕ್ಕೆ ತಕ್ಕಂತೆ ಖರೀದಿ ಕೇಂದ್ರಗಳನ್ನು ತೆರೆದು ರಾಜ್ಯ ಸರ್ಕಾರದ ಖರೀದಿ ಸಂಸ್ಥೆಯಾದ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ ನಿಯಮಿತ (ಮಾರ್ಕ್‌ಫೆಡ್) ಮೂಲಕ ಖರೀದಿಸಲಾಗುತ್ತಿದೆ. |

**(ಸಂಖ್ಯೆ:ಸಿಒ 524 ಎಂಆರ್‌ಇ 2020)**

ಎಸ್.ಟಿ.ಸೋಮಶೇಖರ್

**(ಎಸ್.ಟಿ.ಸೋಮಶೇಖರ್)**
**ಸಹಕಾರ ಸಚಿವರು**